## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 128
ಸದಸ್ಯರ ಹೆಸರು : ಶ್ರೀ ಕೆ.ಟಿ. ಶ್ರೀಕಂಠೇಗೌಡ (ಪದವಿಧರ ಕ್ಷೇತ್ರ)
ಉತ್ತರಿಸುವ ದಿನಾಂಕ : 13-09-2021
ಉತ್ತರಿಸುವ ಸಚಿವರು : ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಪದವಿ ಪೂರ್ವ ಕಾಲೇಜುಗಳ ಉಪನ್ಯಾಸಕರು, ಪ್ರಾಂಶುಪಾಲರು ಹಾಗೂ ಪ್ರೌಢಾಶಾಲಾ ಶಿಕ್ಷಕರು ಮತ್ತು ಮುಖ್ಯ ಶಿಕ್ಷಕರ ವೇತನ ತಾರತಮ್ಯದ ಬಗ್ಗೆ 'ಕುಮಾರ್ ನಾಯಕ್' ಸಮಿತಿಯನ್ನು ಯಾವಾಗ ರಚಿಸಲಾಯಿತು; | **ಪದವಿ ಪೂರ್ವ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ**<br><br>ಸರ್ಕಾರದ ಆದೇಶ ಸಂಖ್ಯೆ:ಇಡಿ 126 ಡಿಜಿಡಬ್ಲ್ಯೂ 2011 ದಿನಾಂಕ:11-04-2011ರಲ್ಲಿ ಸಮಿತಿಯನ್ನು ರಚಿಸಲಾಗಿತ್ತು.<br><br>**ಪ್ರೌಢ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ**<br><br>ಪ್ರೌಢಶಾಲಾ ಸಹ ಶಿಕ್ಷಕರು, ಮುಖ್ಯ ಶಿಕ್ಷಕರ ವೇತನ ತಾರತಮ್ಯದ ಬಗ್ಗೆ ಕುಮಾರ್ ನಾಯಕ್ ನೇತೃತ್ವದಲ್ಲಿ ಸಮಿತಿಯನ್ನು ಸರ್ಕಾರದ ಆದೇಶ ಸಂಖ್ಯೆ:ಇಡಿ 126 ಡಿಜಿಡಬ್ಲ್ಯೂ 2011 ದಿನಾಂಕ:25-03-2011ರಲ್ಲಿ ರಚಿಸಲಾಗಿದೆ. |
| ಆ) | ಸದರಿ ಸಮಿತಿಯು ಯಾವಾಗ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದೆ; | ಪದವಿ ಪೂರ್ವ ಶಿಕ್ಷಣ ಇಲಾಖೆಗೆ ಸಂಬಂಧಿಸಿದ ವರದಿಯನ್ನು ದಿನಾಂಕ:08-07-2011ರಲ್ಲಿ ಹಾಗೂ ಪ್ರೌಢ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ದಿನಾಂಕ:11-08-2011ರಂದು ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದೆ. |
| ಇ) | ಈ ವರದಿಯ ಜಾರಿ ಕುರಿತು ಸರ್ಕಾರದ ಸ್ಪಷ್ಟ ನಿಲುವೇನು; (ಮಾಹಿತಿಯನ್ನು ನೀಡುವುದು) | **ಪದವಿ ಪೂರ್ವ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ**<br><br>ಶ್ರೀ ಕುಮಾರ್ ನಾಯಕ್, ಅಂದಿನ ಸರ್ಕಾರದ ಕಾರ್ಯದರ್ಶಿ, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ ಇವರ ವರದಿಯಲ್ಲಿನ ಪ್ರಮುಖ ಶಿಫಾರಸ್ಸುಗಳು ಈ ಕೆಳಕಂಡಂತಿದೆ:<br><br>ಕ್ರಮ ಸಂಖ್ಯೆ — ಶಿಫಾರಸ್ಸು<br>1. ಉಪನ್ಯಾಸಕರ ವೇತನ ಶ್ರೇಣಿ ರೂ.11400-21600 ಬದಲಾಗಿ, ರೂ.12650-23250 ಕ್ಕೆ ಪರಿಷ್ಕರಿಸುವುದು.<br>2. ಪ್ರಾಚಾರ್ಯರಿಗೆ ರೂ.16400-26250 ವೇತನ |

| | | | |
|---|---|---|---|
| | | | ಶ್ರೇಣಿಯನ್ನು ನೀಡಿ ಪ್ರಾಚಾರ್ಯರು ಬೋಧನಾ ಕಾರ್ಯದಲ್ಲಿ ಆಸಕ್ತಿಯಿಂದ ತೊಡಗಿಸಿಕೊಳ್ಳಲು ಪೂರಕವಾಗಿ ರೂ.500/-ಗಳ ವಿಶೇಷ ಭತ್ಯೆಯನ್ನು ವಿಸ್ತರಿಸಲು ಹಾಗೂ ಪ್ರಾಚಾರ್ಯರ ಒಟ್ಟು ವೃಂದ ಬಲದ ಶೇಕಡ 25ರಷ್ಟು ಪ್ರಾಚಾರ್ಯರಿಗೆ ಸರಿ ಹೊಂದುವ ಆಯ್ಕೆ ಶ್ರೇಣಿ ವೇತನ ಸೌಲಭ್ಯವನ್ನು ಮಂಜೂರು ಮಾಡುವುದು. |
| | | 3. | M.Phil. ಪಡೆದ ಉಪನ್ಯಾಸಕರಿಗೆ ಒಂದು ಹೆಚ್ಚುವರಿ ವಾರ್ಷಿಕ ವೇತನ ಬಡ್ತಿ ಹಾಗೂ Ph.D ಪಡೆದ ಉಪನ್ಯಾಸಕರಿಗೆ ಎರಡು ಹೆಚ್ಚುವರಿ ವಾರ್ಷಿಕ ವೇತನ ಬಡ್ತಿ ಮಂಜೂರು ಮಾಡಲು ಶಿಫಾರಸ್ಸು ಮಾಡಿದೆ. |
| | | 4. | ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಹಾಗೂ 15 ವರ್ಷಗಳ ಸೇವೆ ಪೂರೈಸಿರುವ ಮತ್ತು ತಮ್ಮ ಬೋಧನಾ ವಿಷಯದಲ್ಲಿ ಶೇಕಡ 55ರಷ್ಟು ಅಂಕ ಗಳಿಸಿ, ಎನ್‌ಇಟಿ/ಎಸ್‌ಎಲ್‌ಇಟಿ ಪರೀಕ್ಷೆಗಳಲ್ಲಿ ಅರ್ಹತೆ ಪಡೆದ ಉಪನ್ಯಾಸಕರಿಗೆ ಪದವಿ ಕಾಲೇಜುಗಳ ಉಪನ್ಯಾಸಕರ ಹುದ್ದೆಗೆ ಬಡ್ತಿ ನೀಡಲು ಉನ್ನತ ಶಿಕ್ಷಣ ಇಲಾಖೆಯ ಕಾಲೇಜು ಶಿಕ್ಷಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ತರುವುದು ಸೂಕ್ತವಾಗಿದೆ ಎಂದು ಶಿಫಾರಸ್ಸು ಮಾಡಿದೆ. |
| | | 5. | ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಸೇವೆ ಸಲ್ಲಿಸಿ ಪದವಿ ಪೂರ್ವ ಕಾಲೇಜುಗಳಲ್ಲಿ ಸೇವಾ ಸಕ್ರಮಗೊಂಡ ಉಪನ್ಯಾಸಕರ ಹಿಂದಿನ ಸೇವೆಯನ್ನು ಸಕ್ರಮಗೊಳಿಸುವುದು. |
| | | 6. | ಗುತ್ತಿಗೆ ಆಧಾರದಲ್ಲಿ ನೇಮಕವಾಗಿ ಸೇವಾ ಸಕ್ರಮಗೊಂಡ ಉಪನ್ಯಾಸಕರ ಕುರಿತಂತೆ ಹೊರಡಿಸಿರುವ ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 12 ಎಸ್‌ಆರ್‌ಇ 1997 ದಿನಾಂಕ:08-10-1999ರಲ್ಲಿ ಗುತ್ತಿಗೆ ಶಿಕ್ಷಕರು / ಉಪನ್ಯಾಸಕರುಗಳ ಸಕ್ರಮಾತಿ ನಿಯಮಗಳು 1990 ರ ನಿಯಮ 4 (1)ಕ್ಕೆ ತಿದ್ದುಪಡಿಯ ಮರು ಪರಿಶೀಲನೆ. |
| | | | ಶ್ರೀ ಕುಮಾರ್ ನಾಯಕ್, ಅಂದಿನ ಸರ್ಕಾರದ ಕಾರ್ಯದರ್ಶಿ, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ |

ಇವರ ಸಮಿತಿಯ ಶಿಫಾರಸ್ಸುಗಳಿಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಕ್ರಮ ಕೈಗೊಳ್ಳಲಾಗಿದೆ–

| ಶಿಫಾರಸ್ಸು ಸಂಖ್ಯೆ | ಕೈಗೊಂಡಿರುವಕ್ರಮ |
|---|---|
| 1. | ಜೂನ್ 2016ರಂದು ಕಾರ್ಯ ನಿರ್ವಹಿಸುತ್ತಿರುವ ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲರು /ಉಪನ್ಯಾಸಕರುಗಳಿಗೆ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ಮಂಜೂರು ಮಾಡಲಾಗಿದೆ. |
| 2. | 1. ಸರ್ಕಾರದ ಆದೇಶ ಸಂಖ್ಯೆ: ಇಡಿ 312 ಡಿಜಿಡಿ 2012 ದಿನಾಂಕ:5–9–2014ರಂತೆ ನಿಯೋಜನೆ ಭತ್ಯೆಯನ್ನು ರೂ.300/–ಗಳಿಂದ ರೂ750/–ಕ್ಕೆ ಹೆಚ್ಚಿಸಿ ಆದೇಶಿಸಿರುತ್ತದೆ.<br><br>2. ಸರ್ಕಾರದ ಆದೇಶ ಸಂಖ್ಯೆ: ಇಡಿ 87 ಡಿಜಿಡಿ 2016 ದಿನಾಂಕ: 15–04–2016ರಂತೆ ಈ ಕೆಳಕಂಡ ಸೌಲಭ್ಯಗಳನ್ನು ನೀಡಲಾಗಿರುತ್ತದೆ.<br>• ಪ್ರಸ್ತುತ ರೂ.500/–ಗಳ ವಿಶೇಷ ಭತ್ಯೆಯನ್ನು ಪಡೆಯುತ್ತಿರುವ ಉಪನ್ಯಾಸಕರುಗಳಿಗೆ ಸದರಿ ವಿಶೇಷ ಭತ್ಯೆಯನ್ನು ಮುಂದುವರೆಸಲಾಗಿದೆ.<br>• ಪದವಿ ಪೂರ್ವ ಶಿಕ್ಷಣ ಇಲಾಖೆಯ ಪ್ರಾಂಶುಪಾಲರಿಗೆ ಮಾಸಿಕ ರೂ.1000/–ಗಳ ವಿಶೇಷ ಭತ್ಯೆಯನ್ನು ಮಂಜೂರು ಮಾಡಲಾಗಿದ್ದು, ದಿನಾಂಕ:01.06.2016 ರಿಂದ ಅಂದರೆ, 2016ರ ಜೂನ್ ತಿಂಗಳ ವೇತನದಿಂದ ಜಾರಿಗೆ ಬಂದಿರುತ್ತದೆ.<br>• ತಮ್ಮ ವೇತನ ಶ್ರೇಣಿಯ ಅಂತಿಮ ಹಂತವನ್ನು ತಲುಪಿರುವ ಪ್ರಾಂಶುಪಾಲರು/ಉಪನ್ಯಾಸಕರುಗಳು ಮೇಲಿನಂತೆ ಮಂಜೂರು ಮಾಡಲಾಗಿರುವ ಒಂದು ಹೆಚ್ಚುವರಿ ವೇತನ ಬಡ್ತಿ ಸೌಲಭ್ಯವನ್ನು ಪಡೆಯಲು ಅರ್ಹರಾಗಿರುತ್ತಾರೆ.<br>• ಮೇಲಿನ ಸೌಲಭ್ಯಗಳನ್ನು ಪದವಿ |

| | | | |
|---|---|---|---|
| | | | ಪೂರ್ವ ಶಿಕ್ಷಣ ಕಾಲೇಜುಗಳ ಅನುದಾನಕ್ಕೆ ಒಳಪಟ್ಟಿರುವ ಪ್ರಾಂಶುಪಾಲರು ಮತ್ತು ಉಪನ್ಯಾಸಕರುಗಳಿಗೂ ಸಹ ವಿಸ್ತರಿಸಲಾಗಿದೆ. |
| | | 3. | Ph.D ಅಥವಾ M.Phil. ಪಡೆದ ಉಪನ್ಯಾಸಕರಿಗೆ ಹೆಚ್ಚುವರಿ ವಾರ್ಷಿಕ ವೇತನ ಬಡ್ತಿ ನೀಡುವ ಬಗ್ಗೆ ಆರ್ಥಿಕ ಇಲಾಖೆಯ ಸಹಮತಿ ಕೋರಲಾಗಿ, ಆರ್ಥಿಕ ಇಲಾಖೆಯು ಸದರಿ ಪ್ರಸ್ತಾವನೆಗೆ ಸಹಮತಿ ನೀಡಿರುವುದಿಲ್ಲ. |
| | | 4. | NET/SLET ಪರೀಕ್ಷೆ ತೇರ್ಗಡೆ ಹೊಂದಿದ ಪದವಿ ಪೂರ್ವ ಉಪನ್ಯಾಸಕರುಗಳನ್ನು ಪದವಿ ಕಾಲೇಜಿಗೆ ಬಡ್ತಿ ನೀಡುವ ಶಿಫಾರಸ್ಸನ್ನು ಉನ್ನತ ಶಿಕ್ಷಣ ಇಲಾಖೆಯು ಒಪ್ಪಿರುವುದಿಲ್ಲ. |
| | | 5. | ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಸೇವೆ ಸಲ್ಲಿಸಿ ಪದವಿ ಪೂರ್ವ ಕಾಲೇಜುಗಳಲ್ಲಿ ಸೇವಾ ಸಕ್ರಮಗೊಂಡ ಉಪನ್ಯಾಸಕರ ಹಿಂದಿನ ಸೇವೆಯನ್ನು ಸಕ್ರಮಗೊಳಿಸುವ ಪ್ರಸ್ತಾವನೆಗೆ ಆರ್ಥಿಕ ಇಲಾಖೆಯು ಸಹಮತಿ ನೀಡಿರುವುದಿಲ್ಲ. |
| | | 6. | ಗುತ್ತಿಗೆ ಆಧಾರದ ಮೇಲೆ ನೇಮಕವಾಗಿ ಸೇವಾ ಸಕ್ರಮಗೊಂಡ ಉಪನ್ಯಾಸಕರ ಕುರಿತಂತೆ ಹೊರಡಿಸಿರುವ ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 12 ಎಸ್‌ಆರ್‌ಇ 1997 ದಿನಾಂಕ:08-10-1999 ರಲ್ಲಿ ಗುತ್ತಿಗೆ ಶಿಕ್ಷಕರು/ಉಪನ್ಯಾಸಕರುಗಳ ಸಕ್ರಮಾತಿ ನಿಯಮಗಳು 1990ರ ನಿಯಮ 4(1)ಕ್ಕೆ ತಿದ್ದುಪಡಿಯ ಮರು ಪರಿಶೀಲನೆ ಬಗ್ಗೆ ಶ್ರೀ ಶ್ರೀಕಂಠೇಗೌಡ, ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು ಇವರ ನೇತೃತ್ವದ ಸಮಿತಿಯನ್ನುರಚಿಸಲಾಗಿದ್ದು, ಸಮಿತಿಯು ವರದಿ ಸಲ್ಲಿಸಿದ ನಂತರ ಪ್ರಸ್ತಾವನೆಯನ್ನು ಪರಿಶೀಲಿಸಲಾಗುವುದು. |
| | | | **ಪ್ರೌಢ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ**<br>• ವೇತನ ತಾರತಮ್ಯಕ್ಕೆ ಸಂಬಂಧಿಸಿದಂತೆ ಪ್ರೌಢ ಶಾಲಾ ಸಹಶಿಕ್ಷಕರ ವೇತನವನ್ನು ಕೆಳಗಿನಂತೆ |

| | | |
|---|---|---|
| | | ನಿಗದಿಪಡಿಸಲು ಸಮಿತಿಯು ಶಿಫಾರಸ್ಸು ಮಾಡಿದೆ.<br>✓ ಸಹ ಶಿಕ್ಷಕರ ವೇತನ ಶ್ರೇಣಿ (ನೇಮಕಾತಿಯಾದಾಗ) 9500–17250<br>✓ ಕಾಲಮಿತಿ ಬಡ್ತಿ ಪಡೆದ ಸಹ ಶಿಕ್ಷಕರ ವೇತನ ಶ್ರೇಣಿ 10000–18150<br>✓ ಸ್ವಯಂಚಾಲಿತ ಬಡ್ತಿ ಪಡೆದ ಸಹ ಶಿಕ್ಷಕರ ವೇತನ ಶ್ರೇಣಿ 10800–20025<br>✓ ಸಹ ಶಿಕ್ಷಕರು ಗ್ರೇಡ್–1 ವೇತನ ಶ್ರೇಣಿ (20 ವರ್ಷ ಸೇವೆ ಪೂರ್ಣಗೊಳಿಸಿದ ಸಹ ಶಿಕ್ಷಕರು) 11400–21600<br>• ಈ ಶಿಫಾರಸ್ಸಿನ ವರದಿಯನ್ನು ಆಧರಿಸಿ, ಸರ್ಕಾರ, ಆದೇಶ ಸಂಖ್ಯೆ: ಇಡಿ 78 ಎಸ್.ಎಲ್.ಬಿ 2016 ದಿನಾಂಕ:15.04.2016ರಲ್ಲಿ ದಿನಾಂಕ:01.08.2008 ರ ಪೂರ್ವದಲ್ಲಿ ಸರ್ಕಾರಿ/ ಅನುದಾನಿತ ಪ್ರೌಢ ಶಾಲೆಯಲ್ಲಿ ನೇಮಕಾತಿಗೊಂಡು ಕಾರ್ಯ ನಿರ್ವಹಿಸುತ್ತಿರುವ ಶಿಕ್ಷಕರುಗಳಿಗೆ ನೀಡಲಾಗುತ್ತಿರುವ ರೂ.400/– ಗಳ ವಿಶೇಷ ಭತ್ಯೆಯನ್ನು ಮುಂದುವರಿಸಿದೆ, ಹಾಗೂ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ದಿನಾಂಕ: 01.06.2016 ರಿಂದ ಮಂಜೂರು ಮಾಡಿ ಜಾರಿಗೊಳಿಸಿದೆ.<br>• ದಿನಾಂಕ: 01.08.2008 ರ ನಂತರ ನೇಮಕಗೊಂಡ ಪ್ರೌಢ ಶಾಲಾ ಸಹ ಶಿಕ್ಷಕರುಗಳಿಗೂ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ದಿನಾಂಕ:01.06.2016 ರಿಂದ ಮಂಜೂರು ಮಾಡಿ ಜಾರಿಗೊಳಿಸಿದೆ. |
| ಈ) | ಈ ವರದಿಯನ್ನು ಸರ್ಕಾರ ಯಾವಾಗ ಜಾರಿ ಮಾಡುವುದು? (ಮಾಹಿತಿಯನ್ನು ನೀಡುವುದು) | <u>**ಪದವಿ ಪೂರ್ವ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ**</u><br>'ಇ' ಪ್ರಶ್ನೆಗೆ ನೀಡಿರುವ ಉತ್ತರದಲ್ಲಿ ತಿಳಿಸಿರುವಂತೆ ಒಟ್ಟು ಆರು ಶಿಫಾರಸ್ಸುಗಳ ಪೈಕಿ ಎರಡು ಶಿಫಾರಸ್ಸುಗಳನ್ನು ಜಾರಿಗೊಳಿಸಲಾಗಿದೆ.<br>NET/SLET ಪರೀಕ್ಷೆ ತೇರ್ಗಡೆ ಹೊಂದಿದ ಪದವಿ ಪೂರ್ವ ಉಪನ್ಯಾಸಕರುಗಳನ್ನು ಪದವಿ ಕಾಲೇಜಿಗೆ ಬಡ್ತಿ ನೀಡುವ ಶಿಫಾರಸ್ಸನ್ನು ಉನ್ನತ ಶಿಕ್ಷಣ ಇಲಾಖೆಯು ಒಪ್ಪದಿರುವುದರಿಂದ ಜಾರಿಗೆ ತರಲು ಸಾಧ್ಯವಿಲ್ಲ. |

| | | |
|---|---|---|
| | | ಮುಂದುವರೆದು, Ph.D ಅಥವಾ M.Phil. ಪಡೆದ ಉಪನ್ಯಾಸಕರಿಗೆ ಹೆಚ್ಚುವರಿ ವಾರ್ಷಿಕ ವೇತನ ಬಡ್ತಿ ನೀಡುವ ಬಗ್ಗೆ ಆರ್ಥಿಕ ಇಲಾಖೆಯ ಸಹಮತಿ ಕೋರಲಾಗಿ, ಆರ್ಥಿಕ ಇಲಾಖೆಯು ಸದರಿ ಪ್ರಸ್ತಾವನೆಗೆ ಸಹಮತಿ ನೀಡಿರುವುದಿಲ್ಲ. ಆದ್ದರಿಂದ ಈ ಶಿಫಾರಸ್ಸನ್ನು ಜಾರಿಗೆ ತರಲು ಸಾಧ್ಯವಿಲ್ಲ.<br><br>ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಸೇವೆ ಸಲ್ಲಿಸಿ ಪದವಿ ಪೂರ್ವ ಕಾಲೇಜುಗಳಲ್ಲಿ ಸೇವಾ ಸಕ್ರಮಗೊಂಡ ಉಪನ್ಯಾಸಕರ ಹಿಂದಿನ ಸೇವೆಯನ್ನು ಸಕ್ರಮಗೊಳಿಸುವ ಪ್ರಸ್ತಾವನೆಗೆ ಆರ್ಥಿಕ ಇಲಾಖೆಯು ಸಹಮತಿ ನೀಡಿರುವುದಿಲ್ಲ. ಆದ್ದರಿಂದ ಈ ಶಿಫಾರಸ್ಸನ್ನು ಜಾರಿಗೆ ತರಲು ಸಾಧ್ಯವಿಲ್ಲ.<br><br>ಉಳಿದ ಒಂದು ಶಿಫಾರಸ್ಸನ್ನು ಜಾರಿಗೊಳಿಸುವ ಬಗ್ಗೆ ವ್ಯವಹರಣೆ ನಡೆಸಲಾಗುತ್ತಿದೆ. ಸಂಬಂಧಪಟ್ಟ ಇಲಾಖೆಗಳ ಸಹಮತಿ ದೊರಕಿದ ಕೂಡಲೇ ಜಾರಿಗೊಳಿಸಲಾಗುವುದು.<br><br>**ಪ್ರೌಢ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ**<br>ಮೇಲ್ಕಂಡ ಅಂಶಗಳಂತೆ ಪ್ರಸ್ತಾಪಿತ ಸಮಿತಿಯ ಶಿಫಾರಸ್ಸಿನಂತೆ ಸರ್ಕಾರಿ/ಅನುದಾನಿತ ಪ್ರೌಢಶಾಲಾ ಶಿಕ್ಷಕರುಗಳಿಗೆ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ಮಂಜೂರು ಮಾಡಿ ಆದೇಶ ಜಾರಿಗೊಳಿಸಲಾಗಿದೆ. |

**ಸಂಖ್ಯೆ: ಇಪಿ 127 ಡಿಜಿಡಬ್ಲ್ಯೂ 2021**

(ಬಿ.ಸಿ. ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.